೨೧

ಕಿರಿಯರ ಪುಸ್ತಕ ಮಾಲೆ

KANASUGALU
by. Dr. M. Basavanna

Published by Kannada Sahitya Parishat
Chamarajpet, Bangalore-560018

ಮೊದಲ ಮುದ್ರಣ : ೧೯೮೦





ಸಂಪಾದಕ ಸಲಹಾ ಸಮಿತಿ

**ಹಂಪ. ನಾಗರಾಜಯ್ಯ** (ಅಧ್ಯಕ್ಷರು)
**ಡಾ|| ಎಚ್. ನರಸಿಂಹಯ್ಯ**
**ಶೈಲೇಶಚಂದ್ರ**
**ಡಿ. ಲಿಂಗಯ್ಯ**
**ಲಕ್ಷ್ಮಣ್ ತೆಲಗಾವಿ**
**ಎಂ. ಪಿ. ದೇವರಾಜ್**



ಸಂಯೋಜಕ ಸಂಪಾದಕ

**ಕೆ. ಎಚ್. ರಾಮಯ್ಯ**

ಬೆಲೆ : ೭೫ ಪೈಸೆ



ಮುದ್ರಣ :

ಶ್ರೀ ಭಗವಾನ್ ಇಂಡಸ್ಟ್ರೀಸ್
ಗಾಂಧಿಬಜಾರ್, ಬೆಂಗಳೂರು-೫೬೦ ೦೦೪.




# ಕನಸುಗಳು

## ಕನಸಿನ ಕತೆ

'ಕನಸಿನ ಕತೆ' ಅಂದರೆ ಕನಸಿನಲ್ಲಿ ಕಂಡ ಕತೆಯಲ್ಲ; ಕನಸನ್ನು ಕುರಿತಾದ ಕತೆ. ಕನಸೆಂದರೇನು; ಕನಸಿನಲ್ಲಿ ಏನು ಕಾಣುತ್ತೇವೆ, ಏಕೆ ಕಾಣುತ್ತೇವೆ? ಕನಸಿಗೆ ಏನಾದರೂ ಅರ್ಥವಿದೆಯೆ, ಉದ್ದೇಶವಿದೆಯೆ? ಮುಂತಾದ ಪ್ರಶ್ನೆಗಳಿಗೆ ಮನೋವಿಜ್ಞಾನಿಗಳು ಕೊಟ್ಟಿರುವ, ಕೊಡುತ್ತಿರುವ ಸಮಾಧಾನಗಳನ್ನು ಕುರಿತಾದ ಕತೆಯೇ 'ಕನಸಿನ ಕತೆ'!

ಕನಸು, ಹಗಲುಗನಸು ಎಂಬ ಎರಡು ಶಬ್ದಗಳನ್ನು ನೀವು ಕೇಳಿದ್ದೀರಿ. ನಿವು ಒಂದು ಲಾಟರಿ ಟಿಕೆಟ್ಟನ್ನು ಕೊಂಡಿದ್ದೀರಿ ಎಂದುಕೊಳ್ಳೋಣ. ಒಂದು ವೇಳೆ, ನಿಮ್ಮ ಟಿಕೆಟ್ಟಿಗೆ ಒಂದು ಲಕ್ಷ ರೂಪಾಯಿ ಬಂದರೆ-ಗಿಂದರೆ, ನೀವು ಏನೇನು ಮಾಡುವಿರಿ? ಎಲ್ಲೆಲ್ಲಿ ಹೋಗುವಿರಿ? ಎಂಬುದನ್ನು ಕುರಿತು ಒಂದು ಸುಂದರವಾದ ಗಾಳಿ ಗೋಪುರವನ್ನು ಕಟ್ಟುತ್ತೀರಿ ಅಲ್ಲವೆ? ಅದು ಹಗಲುಗನಸು. ಆಗ ನೀವು ಪೂರ್ಣವಾಗಿ ಎಚ್ಚರವಾಗಿರುತ್ತೀರಿ.

ಆದರೆ ನೀವು ನಿದ್ರಿಸುವಾಗ ಆಗುವ ಅನುಭವವೇ ಬೇರೆ ರೀತಿಯದು. ಅದು ಬಹಳ ಮಟ್ಟಿಗೆ ನಿಜವಾಗಿ ನಡೆದಂತೆ ಕಾಣುತ್ತದೆ. ಅದು ನಿಜವಾಗಿ ನಡೆದಿಲ್ಲವೆಂಬುದು ನಿಮಗೆ ತಿಳಿ

ಯುವುದು ನೀವು ಕಣ್ಣುಬಿಟ್ಟ ಮೇಲೆಯೇ; ಪೂರ್ಣವಾಗಿ ಎಚ್ಚರ ವಾದ ನಂತರವೇ! ಈ ಬಗೆಯ ಕುತೂಹಲಕರವಾದ ಅನುಭವ ಗಳೇ ಕನಸುಗಳು.

## ಕನಸು ಕಾಣದವರೇ ಇಲ್ಲ

ಕನಸು ಸಾಮಾನ್ಯವಾಗಿ ಎಲ್ಲರಿಗೂ ಆಗುವ ಒಂದು ಸಹಜ ಅನುಭವ. ಹಾಗೆ ನೋಡಿದರೆ ಕನಸು ಕಾಣದವರೇ ಇಲ್ಲ. ನಿದ್ದೆ ಮಾಡುವುದು ಎಷ್ಟು ಸಹಜವೋ, ಕನಸು ಕಾಣುವುದೂ ಅಷ್ಟೇ ಸಹಜ. ಕನಸನ್ನು ದೈವೀಕವೆಂದು ನಂಬುವವರಿದ್ದಾರೆ. ದೇವರು ಕನಸಿನ ಮೂಲಕ ವ್ಯವಹರಿಸುತ್ತಾನೆಂದು ತಿಳಿಯುವವರಿದ್ದಾರೆ. ಕೆಲವರಿಗೆ ಕನಸು ಮುಂದೆ ಬರುವ ಘಟನೆಗಳ ಮುನ್ಸೂಚನೆ. ಇನ್ನು ಕೆಲವರ ಪ್ರಕಾರ, ಕನಸು ಮನುಷ್ಯನ ಆತ್ಮದ ವಾಸ್ತವಿಕ ವ್ಯವಹಾರ. ಮನುಷ್ಯ ನಿದ್ರಿಸುವಾಗ ಅವನ ಆತ್ಮ ದೇಹದಿಂದ ಹೊರಬಿದ್ದು ಲೋಕಸಂಚಾರಕ್ಕೆ ಹೊರಡುತ್ತದೆಂಬುದು ಇವರ ನಂಬಿಕೆ. ಇದರಿಂದಾಗಿ ನಿದ್ರಿಸುವವರನ್ನು ತಕ್ಷಣ ಎಬ್ಬಿಸ ಬಾರದು. ಹಾಗೆ ಎಬ್ಬಿಸಿದರೆ, ಆತ್ಮ ಶರೀರವನ್ನು ಸೇರಲಾರದೆ ಅವರು ಸಾಯಬಹುದು ಎನ್ನುವ ಮೂಢನಂಬಿಕೆಯೊಂದು ಉಳಿದು ಬಂದಿದೆ.

ಕನಸುಗಳಿಗೆ ಅರ್ಥ ಹೇಳುವ ಕಲೆಯಂತೂ ಬಹಳ ಹಳೆ ಯದು. ಕನಸಿನ ಫಲಾಫಲಗಳನ್ನು ತಿಳಿಸುವ ಗ್ರಂಥಗಳು ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾಗಿವೆ.

## ಕನಸಿನ ಅಧ್ಯಯನ

ಹತ್ತೊಂಬತ್ತನೇ ಶತಮಾನದ ಕೊನೆ ಕೊನೆಯಲ್ಲಿ ಕನ

ಸನ್ನು ಕುರಿತಾದ ವೈಜ್ಞಾನಿಕ ಅಧ್ಯಯನ ಆರಂಭವಾಯಿತೆನ್ನ ಬಹುದು. ಅದನ್ನು ಆರಂಭ ಮಾಡಿದವನು ಒಬ್ಬ ದೊಡ್ಡ ಮನೋವಿಜ್ಞಾನಿ. ಹೆಸರು ಸಿಗ್ಮಂಡ್ ಫ್ರಾಯ್ಡ್. ಅವನು ೧೯೦೦ರಲ್ಲಿ ಬರೆದು ಪ್ರಕಟಿಸಿದ, 'ಕನಸಿನ ಅರ್ಥ ವಿವರಣೆ' ಎಂಬುದು ಕನಸನ್ನು ಕುರಿತಾದ ಪ್ರಮುಖ ವೈಜ್ಞಾನಿಕ ಗ್ರಂಥ. ಈ ಪುಸ್ತಕ ಕನಸಿನ ವಿಚಾರವಾಗಿ ಜನರ ಮೂಢ ನಂಬಿಕೆಗಳನ್ನು ಹೋಗಲಾಡಿಸಿ, ವೈಜ್ಞಾನಿಕ ಆಸಕ್ತಿಯನ್ನು ಕೆರಳಿಸಿತು. ಫ್ರಾಯ್ಡನ ಅನುಯಾಯಿಗಳಾಗಿದ್ದ ವಿಲ್‌ಹೆಲ್ಮ್ ಸ್ಟೆಕೆಲ್, ಕಾರ್ಲ್ ಯೂಂಗ್, ಆಲ್ಫ್ರೆಡ್ ಆಡ್ಲರ್ ಮುಂತಾದವರು ಕನಸಿನ ವಿಷಯವಾಗಿ ಬರೆದು, ಕನಸಿಗೆ ಸಂಬಂಧಪಟ್ಟ ವೈಜ್ಞಾನಿಕ ಸಾಹಿತ್ಯವನ್ನು ಸಮೃದ್ಧಿಗೊಳಿಸಿದರು.



ಸಿಗ್ಮಂಡ್ ಫ್ರಾಯ್ಡ್

ತೀರ ಇತ್ತೀಚೆಗೆ, ಅಂದರೆ ೧೯೫೩ರಲ್ಲಿ, ಚಿಕಾಗೊ ವಿಶ್ವವಿದ್ಯಾಲಯದ ಇಬ್ಬರು ವಿಜ್ಞಾನಿಗಳು ಕನಸಿನ ಅಧ್ಯಯನದಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿದರು. ನೆಥಾನಿಯಲ್ ಕ್ಲೀಟ್‌ಮನ್ ಮತ್ತು ಯೂಜಿನ್ ಅಸರಿನ್‌ಸ್ಕಿ ಎಂಬ ಈ ಇಬ್ಬರು, ನಿದ್ದೆ ಮಾಡುತ್ತಿರುವ ವ್ಯಕ್ತಿಗಳಲ್ಲಿ ನಡೆಯುವ ಶಾರೀರಿಕ ಕ್ರಿಯೆಗಳನ್ನು ಅಭ್ಯಾಸ ಮಾಡುತ್ತಿದ್ದರು. ಒಮ್ಮೊಮ್ಮೆ ನಿದ್ದೆ ಮಾಡುವ ವ್ಯಕ್ತಿಯ ಕಣ್ಣಿನಲ್ಲಿ ಏನೋ ಶೀಘ್ರಗತಿಯ ಚಲನೆ ಕಂಡುಬಂತು. ಅಂಥ ಸಂದರ್ಭಗಳಲ್ಲಿ ಆ ವ್ಯಕ್ತಿಗಳನ್ನು

ಎಚ್ಚರಿಸಿ ವಿಚಾರಿಸಿದಾಗ, ಅವರು ಕನಸು ಕಾಣುತ್ತಿದ್ದುದು ತಿಳಿದುಬಂತು. ಹೀಗೆ ಅಕಸ್ಮಾತ್ತಾಗಿ ಕಂಡುಬಂದ ವಿಚಾರ ಇಂದು ವೈಜ್ಞಾನಿಕ ಸತ್ಯವಾಗಿ ಉಳಿದಿದೆ. ಕನಸು ಕಾಣುವಾಗ ನಾವು ಏನನ್ನೋ ನೋಡುತ್ತಿರುವಂತೆ ವರ್ತಿಸುವುದರಿಂದ ನಮ್ಮ ಮುಚ್ಚಿದ ಕಣ್ಣಿನ ರೆಪ್ಪೆಗಳಲ್ಲಿ ತ್ವರಿತ ಗತಿಯ ಚಲನೆಗಳುಂಟಾಗುವುದೆಂದು ಸ್ಥಿರಪಡಿಸಲಾಗಿದೆ.



**ಕನಸಿನ ಲಕ್ಷಣಗಳು**



ಈ ಬೆಕ್ಕಿಗೆ ನಾಯಿಯ ಕಾಟ ಕನಸಲ್ಲೂ ತಪ್ಪಿಲ್ಲ

ಕನಸು ಬೀಳುವುದು ಒಂದು ಸಾಮಾನ್ಯವಾದ, ಸ್ವಾಭಾವಿಕವಾದ ಮಾನಸಿಕ ಕ್ರಿಯೆ. ಪ್ರಾಣಿಗಳೂ ಕನಸು ಕಾಣುತ್ತವೆಂಬುದು ಇತ್ತೀಚಿನ ಪ್ರಯೋಗಗಳಿಂದ ತಿಳಿದುಬಂದಿದೆ.

ಕನಸಿನಲ್ಲಿ ಕೇಳಿಸಿಕೊಳ್ಳುವುದಕ್ಕಿಂತ ನೋಡುವುದೇ ಹೆಚ್ಚು. ಕನಸು ಚಿತ್ರಮಯವಾಗಿರುತ್ತದೆ ; ಒಮ್ಮೊಮ್ಮೆ ನಿಮಗೆ ಏನನ್ನೋ ಕೇಳಿಸಿಕೊಂಡ ಅನುಭವವಾಗಬಹುದು. ಆಗಾಗ್ಗೆ ವಾಸನೆ, ರುಚಿ ಹಾಗೂ ಸ್ಪರ್ಶಗಳ ಅನುಭವವೂ ಆಗಬಹುದು. ಹೆಚ್ಚಿಗೆ ಇರುವುದೆಲ್ಲಾ ನೋಟವೇ. ಕನಸಿನಲ್ಲಿ ನೀವು ನೋಡುವ ಚಿತ್ರಗಳು ಬಣ್ಣ ಬಣ್ಣಗಳಿಂದ ಕೂಡಿರುತ್ತವೆ. ಆದರೆ ಈ ಬಣ್ಣದ ಅನುಭವ ಬಹು ಬೇಗ ಮರೆತುಹೋಗಿಬಿಡುತ್ತದೆ. ಸಾಮಾನ್ಯವಾಗಿ ನೀವು ವಿವರಿಸುವ ಕನಸಿನ ಚಿತ್ರಗಳು ಕೇವಲ ಕಪ್ಪು–ಬಿಳುಪಾಗಿರುತ್ತವೆ.

ಕನಸಿನಲ್ಲಿ ನಿಮಗೆ ಒಂದು ನಾಟಕ ಅಥವಾ ಸಿನಿಮಾ ನೋಡಿದ ಅನುಭವವಾಗುತ್ತದೆ. ಸಿನಿಮಾ, ನಾಟಕಗಳ ಹಾಗೆಯೇ ಅಲ್ಲಿ ಒಂದು ದೃಶ್ಯವಿರುತ್ತದೆ ; ಕೆಲವಾರು ಪಾತ್ರಧಾರಿಗಳಿರುತ್ತಾರೆ ; ನೀವೂ ಇರುತ್ತೀರಿ. ನೀವೂ ಒಂದು ಪಾತ್ರವಹಿಸುತ್ತಿರಬಹುದು, ಇಲ್ಲವೇ ಕೇವಲ ಪ್ರೇಕ್ಷಕರಾಗಿರಬಹುದು.

ಕನಸಿನ ಘಟನೆಗಳು ಕಂಡಂತಿರುತ್ತವೆ. ಆದರೆ ನೀವು ಏನನ್ನೂ ನಿಜವಾಗಿ ಕಂಡಿರುವುದಿಲ್ಲ. ಅವು ನಿಜವಾದ ಅನುಭವಗಳ ಹಾಗೇ ಕಂಡರೂ ನೀವೇನನ್ನೂ ಅನುಭವಿಸಿರುವುದಿಲ್ಲ. ಕಾಣಲಿಕ್ಕೇನೂ ಇಲ್ಲದೆ ಕಂಡಾಗ, ಕೇಳಲಿಕ್ಕೇನೂ ಇಲ್ಲದೆ ಕೇಳಿಸಿಕೊಂಡಾಗ, ಅಂತಹ ಅನುಭವಗಳನ್ನು ಮನೋವಿಜ್ಞಾನದಲ್ಲಿ ವಿಭ್ರಮೆ (ಹಲ್ಯೂಸಿನೇಷನ್) ಎನ್ನುತ್ತಾರೆ.

## ಇಂದ್ರಿಯ ಪ್ರಚೋದನೆ

ಒಬ್ಬ ವ್ಯಕ್ತಿ ನಿದ್ರಿಸುವಾಗ ಅವನ ಶರೀರದ ಮೇಲಾಗುವ ಪ್ರಚೋದನೆಗಳೇ ಕನಸಿಗೆ ಕಾರಣವೆಂದು ಕೆಲವು ತಜ್ಞರು ಹೇಳುತ್ತಾರೆ. ಉದಾಹರಣೆಗೆ, ನಾವು ನಿದ್ರಿಸುವಾಗ ಹೊರಗಡೆ ಏನೋ ಗಲಾಟೆಯಾಗುತ್ತಿರಬಹುದು; ಗಡಿಯಾರ ಗಂಟೆ ಹೊಡೆಯುತ್ತಿರಬಹುದು; ಮುಖದ ಮೇಲೆ ಬೆಳಕು ಬೀಳುತ್ತಿರಬಹುದು; ಕಿಟಕಿಯ ಪಕ್ಕದಲ್ಲಿ ಮಲಗಿದ್ದು ಮುಖದ ಮೇಲೆ ಮಳೆಹನಿ ಬೀಳುತ್ತಿರಬಹುದು; ಬೇಸಿಗೆಯ ರಾತ್ರಿಯಲ್ಲಿ ಸೆಕೆಯಾಗುತ್ತಿರಬಹುದು; ಚಳಿಗಾಲವಾಗಿದ್ದು ಆಗ ತುಂಬಾ ಚಳಿಯಾಗುತ್ತಿರಬಹುದು; ಸೊಳ್ಳೆಪರದೆ ಕಿತ್ತುಹೋಗಿ ಮೈಮೇಲೆ ಬೀಳುತ್ತಿರಬಹುದು.

ಮತ್ತೆ ಕೆಲವರ ಪ್ರಕಾರ, ಶರೀರದ ಒಳಗಡೆಯಿಂದ ಉಂಟಾಗುವ ಆಂತರಿಕ ಪ್ರಚೋದನೆಗಳು ಕನಸಿಗೆ ಕಾರಣ. ಈ ನಂಬಿಕೆ ಎಷ್ಟು ಬಲವಾಗಿತ್ತೆಂದರೆ, ಒಂದು ಕಾಲದಲ್ಲಿ ವೈದ್ಯರು ರೋಗಗಳನ್ನು ನಿರ್ಧರಿಸಲು ಕನಸುಗಳನ್ನು ಆಧಾರವಾಗಿಟ್ಟುಕೊಳ್ಳುತ್ತಿದ್ದರು. ಒಬ್ಬ ವ್ಯಕ್ತಿಗೆ ಉಸಿರು ಕಟ್ಟಿದ ಹಾಗೆ ಕನಸು ಬಿದ್ದರೆ, ಅವನಿಗೆ ಶ್ವಾಸಕೋಶದ ಕಾಯಿಲೆಯೆಂದು ತಿಳಿಯಲಾಗುತ್ತಿತ್ತು. ಅಂದರೆ ಶರೀರದ ಯಾವುದೇ ಒಂದು ಅಂಗಕ್ಕೆ ಏನಾದರೂ ತೊಂದರೆ ಬರುವುದಿದ್ದರೆ, ಅದು ಇಡೀ ಶರೀರದ ಮೇಲೆ ಒಂದು ತೆರನಾದ ಒತ್ತಡ ತರುವುದೆಂದೂ ಈ ಒತ್ತಡ ಕನಸಿನ ರೂಪದಲ್ಲಿ ಬೀಳುವುದೆಂದೂ ವೈದ್ಯರ ನಂಬಿಕೆಯಾಗಿತ್ತು. ಕನಸುಗಳು ಮುಂಬರುವ ರೋಗಗಳ ಮುನ್ಸೂಚನೆ ಎಂಬುದು ಇವರ ಅಭಿಪ್ರಾಯ. ಮಹಾ ಜ್ಞಾನಿಯಾಗಿದ್ದ ಅರಿಸ್ಟಾಟಲ್

ಹಾಗೂ ಆಧುನಿಕ ವೈದ್ಯ ವಿಜ್ಞಾನದ ಪ್ರವರ್ತಕ ಹಿಪೊಕ್ರೇಟಿಸ್ ಇವರು ಈ ಅಭಿಪ್ರಾಯವನ್ನು ಹೊಂದಿದ್ದರು.

ವ್ಯಕ್ತಿ ನಿದ್ರಿಸುವಾಗ ಅವನಿಗಾಗುವ ಈ ಇಂದ್ರಿಯಾನುಭವಗಳು ಎಷ್ಟರ ಮಟ್ಟಿಗೆ ಕನಸಿಗೆ ಕಾರಣವಾಗಬಹುದೆಂಬುದನ್ನು ಕುರಿತು ಹಲವಾರು ಪ್ರಯೋಗಗಳು ನಡೆದಿವೆ. ಒಂದೇ ಇಂದ್ರಿಯ ಪ್ರಚೋದನೆ ಬೇರೆ ಬೇರೆ ವ್ಯಕ್ತಿಗಳಲ್ಲಿ, ಬೇರೆ ಬೇರೆ ಕನಸುಗಳನ್ನು ಹುಟ್ಟಿಸಬಲ್ಲದು. ಕೆಲವು ವೇಳೆ ಯಾವ ಇಂದ್ರಿಯ ಪ್ರಚೋದನೆಯೂ ಯಾರಲ್ಲೂ ಯಾವ ಕನಸಿಗೂ ಕಾರಣವಾಗಿಲ್ಲ. ಆದುದರಿಂದ ಬಾಹ್ಯ ಅಥವಾ ಆಂತರಿಕ ಪ್ರಚೋದನೆಗಳು ಕನಸನ್ನು ನಿರ್ಮಿಸುತ್ತವೆಂಬ ವಾದದಲ್ಲಿ ಹುರುಳಿಲ್ಲ.

ಒಂದು ಪ್ರಯೋಗದಲ್ಲಿ, ಒಬ್ಬ ನಿದ್ರಿಸುತ್ತಿರುವ ವ್ಯಕ್ತಿಯ ಕೈಯಲ್ಲಿ ಒಂದು ಮೇಣದಬತ್ತಿಯನ್ನು ಆಗಾಗ್ಗೆ ಇಡಲಾಯಿತು. ಹೀಗೆ ಮಾಡಿದಾಗ ಒಂದು ಸಾರಿ ಅವನಿಗೆ ಬೆತ್ತ ಹಿಡಿದಿರುವ ಕನಸು ಬಿತ್ತು. ಇನ್ನೊಂದು ಸಾರಿ ವ್ಯಾಯಾಮ ಶಾಲೆಯಲ್ಲಿ ದೊಣ್ಣೆ ಹಿಡಿದು ವ್ಯಾಯಾಮ ಮಾಡುವ ಕನಸಾಯಿತು. ಇನ್ನೊಂದು ಸಾರಿ ಇನ್ನೊಂದು ಥರದ ಕನಸು ಬಿತ್ತು. ಹೀಗೆ ಒಂದೇ ಅನುಭವ ಬೇರೆ ಬೇರೆ ಕನಸಿಗೆ ಕಾರಣವಾದ ನಿದರ್ಶನಗಳೂ ಹಲವಾರಿವೆ. ಒಟ್ಟಿನಲ್ಲಿ ದೈಹಿಕ ಪ್ರಚೋದನೆಗಳು ಕನಸಿಗೆ ಪ್ರೇರಣೆಯಾಗುವ ಸಂಭವ ಕಡಿಮೆ. ಕನಸಿನಲ್ಲಿ ಅವುಗಳ ಪಾತ್ರ ಅತ್ಯಲ್ಪ.

### ಶಾರೀರಿಕ ಕ್ರಿಯೆಯ ಸಂಬಂಧ

ಕನಸಿನ ಅಭ್ಯಾಸಿಗಳಿಗೆ ೧೯೫೩ ಒಂದು ಬಹಳ ಮುಖ್ಯವಾದ ವರ್ಷ. ಅಂದಿನವರೆಗೆ ನಿದ್ರಿಸುತ್ತಿರುವ ವ್ಯಕ್ತಿ ಕನಸು

ಕಾಣುತ್ತಿದ್ದಾನೆಯೋ ? ಎಷ್ಟು ಹೊತ್ತು ಕನಸು ಕಾಣುತ್ತಾನೆ ? ಒಂದು ರಾತ್ರಿ ಎಷ್ಟು ಬಾರಿ ಕನಸು ಬೀಳುತ್ತದೆ ? ಎನ್ನುವ ವಿಷಯಗಳು, ನಿದ್ರಿಸುವವರನ್ನು ಬಿಟ್ಟು ಬೇರೆಯುವರಿಗೆ ತಿಳಿಯುವ ಸಾಧ್ಯತೆಗಳಿರಲಿಲ್ಲ. ಇದು ಸಾಧ್ಯವಾದುದು, ಈ ಮೊದಲೇ ಹೇಳಿದ ಕ್ಲೀಟ್‌ಮನ್ ಮತ್ತು ಅಸರಿನ್‌ಸ್ಕಿ ಎಂಬುವರ ೧೯೫೩ರ ಸಂಶೋಧನೆಗಳ ನಂತರ. ಈ ಇಬ್ಬರು ತಜ್ಞರು ನಿದ್ರೆಯಲ್ಲಾಗುವ ಶಾರೀರಿಕ ಬದಲಾವಣೆಗಳನ್ನು ಅಭ್ಯಾಸ ಮಾಡುತ್ತಿದ್ದಾಗ, ಅವರಿಗೆ ನಿದ್ರಿಸುವ ವ್ಯಕ್ತಿ ಒಮ್ಮೊಮ್ಮೆ ಏನನ್ನೋ ನೋಡುತ್ತಿರುವಂತೆ, ಕಣ್ಣುಗಳನ್ನು ಶೀಘ್ರವಾಗಿ ಅತ್ತಿಂದಿತ್ತ ಚಲಿಸುವುದು ಕಂಡುಬಂತು. ಆಗ ಆ ವ್ಯಕ್ತಿಯನ್ನು ಎಬ್ಬಿಸಿ ವಿಚಾರಿಸಿದಾಗ ಅವನು ನಿಜವಾಗಿ ಕನಸು ಕಾಣುತ್ತಿದ್ದುದು ತಿಳಿದು ಬಂತು. ಬೇರೆಯ ವ್ಯಕ್ತಿಗಳನ್ನು ಪರೀಕ್ಷಿಸಿದಾಗಲೂ ಇದೇ ವಿಚಾರ ತಿಳಿದುಬಂತು. ಅಷ್ಟೇ ಅಲ್ಲ, ಈ ರೀತಿಯ ಕಣ್ಣಿನ ಚಲನೆಗಳು ಕಂಡುಬರದಿದ್ದಾಗ, ಎಬ್ಬಿಸಿ ವಿಚಾರಿಸಿದಾಗ ಯಾರೂ ತಾವು ಕನಸು ಕಂಡ ವಿಷಯ ಹೇಳಲಿಲ್ಲ. ಈ ಸಂಶೋಧನೆ ಬಹಳ ಮಹತ್ತರದ್ದಾಗಿದ್ದು, ಕನಸಿನ ಅಧ್ಯಯನದಲ್ಲಿ ಇಂದು ಬಹಳ ಪ್ರಗತಿಗೆ ಸಾಧ್ಯವಾಗಿದೆ.

ಇದಾದ ಕೊಂಚ ಕಾಲದಲ್ಲೇ ಕನಸಿಗೆ ಸಂಬಂಧಿಸಿದ ಇನ್ನೊಂದು ಶಾರೀರಿಕ ಕ್ರಿಯೆಯನ್ನು ಗುರುತಿಸಲಾಯಿತು. ಇದು ಮಿದುಳಿನ ವಿದ್ಯುತ್ ಕ್ರಿಯೆಗೆ ಸಂಬಂಧಿಸಿದ್ದು. ನಮ್ಮ ಮಿದುಳು ಸದಾ ಕಾಲದಲ್ಲೂ ಒಂದು ರೀತಿಯ ವಿದ್ಯುತ್ತಿನ ಅಲೆಗಳನ್ನು ಹೊರಗೆಡಹುತ್ತಿರುತ್ತದೆ. ಈ ಅಲೆಗಳು ಒಂದೊಂದು ಕಾಲದಲ್ಲಿ ಒಂದೊಂದು ಸ್ವರೂಪದಲ್ಲಿರುತ್ತವೆ. ಅಂದರೆ ನಾವು ಎಚ್ಚರವಾಗಿರುವ ಕಾಲದಲ್ಲಿ ಒಂದು ರೀತಿಯಲ್ಲಿದ್ದರೆ, ನಿದ್ರಿಸು

ವಾಗ ಬೇರೆ ರೀತಿ ಇರುತ್ತವೆ. ಅಷ್ಟೇ ಅಲ್ಲ; ನಿದ್ರೆ ಮಾಡು ವಾಗಲೂ ನಿದ್ರೆಯ ಆಳವನ್ನನುಸರಿಸಿ ಅಲೆಗಳ ಆವರ್ತ ಬೇರೆ ಬೇರೆಯಾಗಿರುತ್ತದೆ.

ಸಾಮಾನ್ಯ ನಿದ್ದೆಯಲ್ಲಿ ಮಿದುಳಿನ ಅಲೆಗಳು ದೊಡ್ಡವಿದ್ದು, ಆವರ್ತ ಸಂಖ್ಯೆ ಕಡಿಮೆ ಇರುತ್ತದೆ. ಅಂದರೆ ಮಿಡಿತದ ಗತಿ ನಿಧಾನವಾಗಿರುತ್ತದೆ. ಕನಸುಗಳು ಬೀಳುತ್ತಿರುವಾಗ ಅಲೆಗಳ ಉದ್ದ ಕಡಿಮೆ ಇದ್ದು, ಆವರ್ತಗಳ ಸಂಖ್ಯೆ ಹೆಚ್ಚಾಗಿರುತ್ತದೆ. ಇದೇ ಕಾಲದಲ್ಲಿ ಕಣ್ಣಿನ ರೆಪ್ಪೆಗಳ ಶೀಘ್ರಚಲನೆ ಕಂಡುಬರು ತ್ತದೆ. ಇತ್ತೀಚಿನ ಪ್ರಯೋಗಗಳ ಪ್ರಕಾರ, ಈ ಎರಡೂ ಕ್ರಿಯೆಗಳು ಕಂಡುಬಂದಾಗ ಎಬ್ಬಿಸಿದ ವ್ಯಕ್ತಿಗಳಲ್ಲಿ ನೂರಕ್ಕೆ ತೊಂಬತ್ತರಷ್ಟು ಮಂದಿಗೆ ಕನಸು ಬೀಳುತ್ತಿದ್ದುದು ಸ್ಪಷ್ಟವಾಗಿ ತಿಳಿದುಬಂದಿದೆ. ಈ ಕ್ರಿಯೆಗಳು ಇಲ್ಲದಾಗ ಎಬ್ಬಿಸಿದವರ ಪೈಕಿ ನೂರಕ್ಕೆ ಹತ್ತು ಜನ ಮಾತ್ರ ಕನಸು ಕಂಡದ್ದಾಗಿ ತಿಳಿಸಿ ದ್ದಾರೆ. ಈ ಹತ್ತು ಜನ ಕೂಡ ನಿಜವಾಗಿಯೂ ಕನಸು ಕಾಣು ತ್ತಿದ್ದಿಲ್ಲ. ಅವರು, ಮೊದಲೇ ಕಂಡ ಕನಸಿನ ಅನುಭವಗಳನ್ನು ಎಬ್ಬಿಸಿದಾಗ ಹೇಳುತ್ತಿರಬಹುದೆಂಬುದು ತಜ್ಞರ ಅಭಿಪ್ರಾಯ.

## ಕೆಲವು ಮುಖ್ಯ ವಿಷಯಗಳು

ಇಂದು ಕನಸಿಗೆ ಸಂಬಂಧಿಸಿದ ಹಲವು ಮುಖ್ಯ ಅಂಶಗಳು ಬೆಳಕಿಗೆ ಬಂದಿವೆ. ಉದಾಹರಣೆಗೆ, ಮೊದಲ ಕನಸು ನಿದ್ರೆ ಆರಂಭಿಸಿದ ಸುಮಾರು ಒಂದು ಗಂಟೆಯ ನಂತರ ಬೀಳುತ್ತದೆ. ಈ ಕನಸು ಸಾಮಾನ್ಯವಾಗಿ ೫ ರಿಂದ ೧೦ ನಿಮಿಷಗಳ ಕಾಲ ಇರುತ್ತದೆ. ಅನಂತರದ ಕನಸುಗಳು ಸುಮಾರು ೯೦ ನಿಮಿಷ ಗಳಿಗೊಮ್ಮೆ ಬೀಳುತ್ತವೆ. ಬರುಬರುತ್ತಾ ಕನಸಿನ ಅವಧಿ

ಹೆಚ್ಚುತ್ತಿರುತ್ತದೆ. ತೀರ ದೊಡ್ಡ ಕನಸು ೩೦ ನಿಮಿಷಗಳ ಕಾಲ ಇರುತ್ತದೆ. ಒಟ್ಟಿನಲ್ಲಿ. ಎಂಟು ಗಂಟೆ ನಿದ್ರಿಸುವ ವ್ಯಕ್ತಿಯು ಸುಮಾರು ನೂರುನಿಮಿಷ ಕನಸು ಕಾಣುತ್ತಾನೆ. ರಾತ್ರಿಯೊಂದರಲ್ಲಿ ಮೂರರಿಂದ ಐದು ಕನಸುಗಳು ಬೀಳುತ್ತವೆ. ಸಣ್ಣ ಮಕ್ಕಳು ವಯಸ್ಕರಿಗಿಂತ ಹೆಚ್ಚು ವೇಳೆ ನಿದ್ರಿಸುತ್ತಾರೆ; ಹಾಗೆಯೇ ಹೆಚ್ಚು ಹೊತ್ತು ಕನಸು ಕಾಣುತ್ತಾರೆ. ಸಾಮಾನ್ಯವಾಗಿ ಎಲ್ಲರೂ ಕನಸು ಕಾಣುತ್ತಾರೆ; ಪ್ರಾಣಿಗಳೂ ಕೂಡ. ಆದರೂ ನಾವು ಒಂದು ಮುಖ್ಯ ವಿಷಯವನ್ನು ಮರೆಯಬಾರದು. ಈ ಎರಡು ವಿಶಿಷ್ಟ ಕ್ರಿಯೆಗಳು ನಾವು ಯಾವಾಗ, ಎಷ್ಟು ಹೊತ್ತು, ಎಷ್ಟು ಸಾರಿ ಕನಸು ಕಾಣುವುವೆಂಬುದನ್ನು ಹೊರತಾಗಿ, ನಾವು ಕನಸಿನಲ್ಲಿ ಏನು ಕಾಣುತ್ತೇವೆ, ನಾವು ಏಕೆ ಕನಸು ಕಾಣುತ್ತೇವೆ ಎಂಬ ಪ್ರಶ್ನೆಗಳಿಗೆ ಸಮಾಧಾನ ಒದಗಿಸಲಾರವು. ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ನಾವು ಮನೋವಿಜ್ಞಾನಿಗಳ ಮರೆಹೋಗಬೇಕಾಗುತ್ತದೆ.

## ಕನಸು ಎಂದರೆ ಏನು ?

ಕನಸು ನಿದ್ರಿಸುವಾಗ ಆಗುವ ಅನುಭವ. ಅದು ಮಾನಸಿಕ ಕ್ರಿಯೆ; ಶಾರೀರಿಕ ಕ್ರಿಯೆಯಲ್ಲ. ಕನಸನ್ನು ಅಧ್ಯಯನ ಮಾಡುವವರು ನೆನಪಿನಲ್ಲಿಡಬೇಕಾದ ಮುಖ್ಯ ವಿಷಯ ಇದು: ಮನೋವಿಜ್ಞಾನಿಗಳ ಪ್ರಕಾರ, ಕನಸು ಮನುಷ್ಯ ನಿದ್ರಿಸುವಾಗ ಅವನ ಮನಸ್ಸು ನಿರ್ಮಿಸುವ ಚಿತ್ರ ಸರಣಿ; ಮನಸ್ಸು ನಿರ್ಮಿಸುವ ಸಚಿತ್ರ ಕಥನ; ಮನಸ್ಸಿನ ಕಲ್ಪನೆಯ ಪ್ರತಿಮೆಗಳು. ಈ ಮಾನಸಿಕ ಕಲ್ಪನೆಗಳಿಗೆ ಯಾವುದೇ ವಿಧವಾದ ಭೌತಿಕ ಹಿನ್ನೆಲೆಯಾಗಲೀ ಶಾರೀರಿಕ ಪ್ರಚೋದನೆಯಾಗಲೀ ಒತ್ತಡವಾಗಲೀ

ಇರುವುದಿಲ್ಲ. ಇದೊಂದು ಪ್ರಚೋದನಾ ರಹಿತ ಅನುಭವ. ಕನಸು ಪೂರ್ಣವಾಗಿ ಒಂದು ಶುದ್ಧ ವಿಭ್ರಮೆ.

ಕನಸು ಬೀಳುವುದು ನಿದ್ರೆಯಲ್ಲಿ. ನಿದ್ರೆ ವಿಶ್ರಾಂತ ಸ್ಥಿತಿ. ನಿದ್ದೆ ಮಾಡುವಾಗ ನಾವು ಹೊರಗಡೆಯ ಪ್ರಪಂಚದ ಮೇಲೆ ಒಂದು ತೆರೆ ಎಳೆದುಬಿಡುತ್ತೇವೆ. ಆಗ ನಮಗೆ ಯಾವುದೇ ಇಂದ್ರಿಯಾನುಭವ ಆಗುತ್ತಿರುವುದಿಲ್ಲ. ನಮ್ಮ ಶರೀರದ ಚಟುವಟಿಕೆಗಳು ಬಹಳ ಮಟ್ಟಿಗೆ ತಗ್ಗಿರುತ್ತವೆ. ಮನಸ್ಸು ಕೂಡ ಮಂಕಾಗುತ್ತದೆ. ಇಲ್ಲಿ ಗುರುತಿಸಬೇಕಾದ್ದು ಇಷ್ಟೆ. ನಿದ್ದೆಯಲ್ಲಿ ನಮ್ಮ ಶರೀರವಾಗಲೀ ಮನಸ್ಸಾಗಲೀ ಪೂರ್ತಿ ಮಲಗಿರುವುದಿಲ್ಲ, ನಿಷ್ಕ್ರಿಯವಾಗಿರುವುದಿಲ್ಲ. ನಮ್ಮ ಮನಸ್ಸು ನಾವು ತಿಳಿದುಕೊಂಡಿರುವುದಕ್ಕಿಂತ ವಿಶಾಲವಾದುದು. ಎಚ್ಚರವಾಗಿರುವಾಗ ನಮ್ಮ ಮನಸ್ಸಿನ ಹತ್ತರಲ್ಲೊಂದು ಭಾಗ ಮಾತ್ರ ಕಾರ್ಯಮಗ್ನವಾಗಿರುತ್ತದೆ. ಇನ್ನುಳಿದ ಒಂಬತ್ತು ಭಾಗ, ನೀರಲ್ಲಿ ತೇಲುವ ಮಂಜುಗಡ್ಡೆಯ ಹಾಗೆ, ನಮ್ಮ ಅರಿವಿಗೆ ಬಂದಿರುವುದಿಲ್ಲ. ಮನಸ್ಸಿನ ಈ ಒಳಭಾಗ ನಿದ್ದೆಯಲ್ಲೂ ಎಚ್ಚರವಾಗಿರುತ್ತದೆ, ಕಾರ್ಯನಿರತವಾಗಿರುತ್ತದೆ. ಈ ಸುಪ್ತ ಮನಸ್ಸಿನ ವ್ಯವಹಾರಗಳು ನಮಗೆ ಕನಸಿನ ರೂಪದಲ್ಲಿ ಅನುಭವಕ್ಕೆ ಬರುತ್ತವೆ.

ನಮ್ಮ ಸುಪ್ತಮನಸ್ಸು ಒಂದು ದೊಡ್ಡ ಉಗ್ರಾಣ. ಅದರಲ್ಲಿ ತುಂಬಿರುವ ವಿಷಯಗಳಿಗೆ ಮಿತಿಯೇ ಇಲ್ಲ. ಸಕಲ ಅನುಭವಗಳ ವಿಶ್ವಕೋಶ ಅದು. ಅದರಲ್ಲಿ ನಮಗೆ ಸ್ಪಷ್ಟವಾಗಿ ಅರಿವಿಲ್ಲದ ಹಲವು ಆಕಾಂಕ್ಷೆಗಳು, ಅತೃಪ್ತ ಬಯಕೆಗಳು, ನಿಷಿದ್ಧ ಕಾಮನೆಗಳು, ಅವ್ಯಕ್ತ ಭಾವನೆಗಳು, ಅಪ್ರಕಟಿತ ಭಾವೋದ್ವೇಗ

ಗಳು, ಪರಿಹಾರ ಕಾಣದ ಸಮಸ್ಯೆಗಳು ತುಂಬಿ ತುಳುಕುತ್ತಿರುತ್ತವೆ.

ನಾವು ನಮ್ಮ ಹಗಲುಜೀವನದ ಗೊಂದಲದಿಂದ ಬಿಡುಗಡೆ ಹೊಂದಿ, ರಾತ್ರಿ ನಿದ್ರೆಯಲ್ಲಿ ವಿಶ್ರಾಂತಿ ಪಡೆಯುವಾಗ, ನಮ್ಮ ಒಳಮನಸ್ಸು ತನ್ನ ಈ ಹಳೆಯ ಕಡತವನ್ನು ಬಿಚ್ಚುತ್ತದೆ. ಅಲ್ಲಿನ ಸಮಸ್ಯೆಗಳಿಗೆ ತನ್ನದೇ ಆದ ಪರಿಹಾರಗಳನ್ನು ಹುಡುಕುತ್ತದೆ. ಅದಕ್ಕಾಗಿ ತನ್ನದೇ ರೀತಿಯಲ್ಲಿ ಆಲೋಚಿಸುತ್ತದೆ. ಈ ಆಲೋಚನಾ ಸರಣಿಗಳ ದೃಶ್ಯರೂಪವೇ ಕನಸು.

ಆಲೋಚನೆ ಒಂದು ಮಾನಸಿಕ ಕ್ರಿಯೆ. ನಿದ್ದೆಯಲ್ಲಾಗಲೀ ಎಚ್ಚರದಲ್ಲಾಗಲೀ ಆಲೋಚನೆಯು ಆಲೋಚನೆಯೇ. ನಮ್ಮ ಆಲೋಚನಾ ಸರಣಿ ನಾವೇ ನಿರ್ಮಿಸಿದ ಭಾವನೆಗಳು, ಅಭಿಪ್ರಾಯಗಳು, ಕಲ್ಪನೆಗಳು, ಪ್ರತಿಮೆಗಳು ಅಥವಾ ನಂಬಿಕೆಗಳನ್ನೊಳಗೊಂಡಿರುತ್ತದೆ. ನಮ್ಮ ಮನಸ್ಸು ಇಂಥ ಮಾನಸಿಕ ಪರಿಕರಗಳನ್ನು ನಿರ್ಮಿಸುತ್ತಲೇ ಇರುತ್ತದೆ. ಈ ಮನೋನಿರ್ಮಿತ ಭಾವನೆಗಳನ್ನು ಇತರರೊಡನೆ ಹಂಚಿಕೊಳ್ಳಬೇಕೆನಿಸಿದಾಗ ಅವನ್ನು ಭಾಷೆಯ ಮೂಲಕ, ಸಂಕೇತಗಳ ಮೂಲಕ ಅಥವಾ ಚಿತ್ರಗಳ ಮೂಲಕ ನಾವು ಹೊರಗೆಡವುತ್ತೇವೆ. ಇದು ನಾವು ಎಚ್ಚರವಾಗಿರುವಾಗ ಅನುಸರಿಸುವ ವಿಧಾನ. ಕನಸಿನಲ್ಲಿ ಕೂಡ, ಮನಸ್ಸು ಮಾಡುತ್ತಿರುವುದು ಇದೇ ಕೆಲಸವನ್ನೇ. ಆದರೆ ಆಗ ನಾವು ನಿದ್ರಿಸುತ್ತಿರುತ್ತೇವೆ, ಅಷ್ಟೆ. ಅಂದರೆ, ನಾವು ನಿದ್ರಿಸುವಾಗ ನಮ್ಮ ಮನಸ್ಸಿನ ಆಲೋಚನೆಗಳು ನಮಗೆ ಕನಸಿನ ರೂಪದಲ್ಲಿ ತೋರಿಬರುತ್ತವೆ. ಎಚ್ಚರವಾಗಿರುವಾಗಿನ ಆಲೋಚನೆಗಳನ್ನು ಭಾಷೆಯ ಮೂಲಕ ಪ್ರಕಟಪಡಿಸುವಂತೆಯೇ, ನಮ್ಮ ಮನಸ್ಸು ನಿದ್ದೆಯ ಕಾಲದಲ್ಲಿ ಚಿತ್ರಗಳ ಮೂಲಕ

ಪ್ರಕಟಿಸುತ್ತದೆ. ಎಚ್ಚರವಾಗಿರುವಾಗ ನಮ್ಮ ಆಲೋಚನೆಗಳನ್ನು ನಾವು ಹಲವರೊಡನೆ ಹಂಚಿಕೊಳ್ಳಬಲ್ಲೆವು. ನಿದ್ದೆಯಲ್ಲಿ ನಮ್ಮ ಸುಪ್ತ ಮನಸ್ಸಿನ ಆಲೋಚನೆಗಳಿಗೆ ಪ್ರೇಕ್ಷಕರು ನಾವೊಬ್ಬರೇ. ಒಂದು ವೇಳೆ ನಮ್ಮ ಕನಸನ್ನು ಟೆಲಿವಿಷನ್ ಮೂಲಕ ಪ್ರಸಾರ ಮಾಡುವುದು ಸಾಧ್ಯವಾದರೆ, ಆಗ ಅದನ್ನು ಇತರರೊಡನೆ ಹಂಚಿಕೊಳ್ಳುವುದು ಸಾಧ್ಯ.

**ಏನೇನು ಕಾಣುತ್ತೇವೆ ?**

ಸಾಮಾನ್ಯವಾಗಿ ಕನಸಿನಲ್ಲಿ ನಾವು ಏನೇನು ಕಾಣುತ್ತೇವೆಂಬುದನ್ನು ತಿಳಿಯಲು, ಮನೋವಿಜ್ಞಾನಿಗಳು ಸಾವಿರಾರು ಜನರಲ್ಲಿ ಪ್ರತಿಯೊಬ್ಬನಿಗೂ ಬೀಳುವ ನೂರಾರು ಕನಸುಗಳನ್ನು ಕಲೆಹಾಕಿ ಅಧ್ಯಯನ ಮಾಡಿದ್ದಾರೆ. ಕೆಲವು ವಿಷಯಗಳು ಕನಸಿನಲ್ಲಿ ಬರುವುದೇ ಇಲ್ಲ. ಉದಾಹರಣೆಗೆ, ನಾವೆಲ್ಲಾ ಸದಾ ತಲೆ ಕೆಡಿಸಿಕೊಳ್ಳುವ ರಾಜಕೀಯ ಹಾಗೂ ಆರ್ಥಿಕ ಸಮಸ್ಯೆಗಳು ಕನಸಿನಲ್ಲಿ ಬರುವುದಿಲ್ಲವೆಂದರೆ ನಿಮಗೆ ಆಶ್ಚರ್ಯವಾಗಬಹುದು. ಇದುವರೆಗೆ ಚುನಾವಣೆಯ ವಿಚಾರವಾಗಿ ಯಾರೂ ಕನಸು ಕಂಡದ್ದು ತಿಳಿದುಬಂದಿಲ್ಲ. ಯುದ್ಧಗಳು, ರಾಜಕಾರಣ, ಕ್ರಿಕೆಟ್, ಟೆನ್ನಿಸ್ ಮುಂತಾದ ದಿನಪತ್ರಿಕೆಗಳಲ್ಲಿ ಕಂಡುಬರುವ ವಿಷಯಗಳು ಕನಸಿನಲ್ಲಿ ಅಷ್ಟಾಗಿ ಪ್ರಕಟವಾಗುವುದಿಲ್ಲ. ಅಷ್ಟೇ ಅಲ್ಲ; ವ್ಯಾಪಾರಿಗಳು ತಮ್ಮ ವ್ಯಾಪಾರದ ವಿಚಾರವಾಗಿ ಕನಸು ಕಾಣುವುದಿಲ್ಲ; ಕಲೆಗಾರರು ಕಲೆಯನ್ನು ಕಾಣುವುದಿಲ್ಲ; ವಿದ್ಯಾರ್ಥಿಗಳು ಅಧ್ಯಯನದ ವಿಷಯ ಕಾಣುವುದಿಲ್ಲ; ಕೂಲಿಕಾರರು ಕೆಲಸದ ವಿಚಾರವಾಗಿ ಕಾಣುವುದಿಲ್ಲ; ಹೆಂಗಸರು ಅಡುಗೆ ಮಾಡುವುದನ್ನು ಕನಸಿನಲ್ಲಿ ಕಾಣುವುದಿಲ್ಲ. ಹಾಗಾದರೆ ಇವರೆಲ್ಲಾ ಕಾಣುವುದೇನು ?

ಸಾಮಾನ್ಯವಾಗಿ ಎಲ್ಲರೂ ಕಾಣುವುದು ತೀರ ವೈಯಕ್ತಿಕ ವಾದ, ಆಂತರಿಕವಾದ, ಸಂವೇದನಾತ್ಮಕವಾದ ಆತ್ಮೀಯ ಭಾವನೆ ಗಳು ; ಮಾನಸಿಕ ಸಂಘರ್ಷಗಳು ; ತುಮುಲಗಳು ; ತಿಕ್ಕಾಟ ಗಳು ; ಹಾಗೂ ಬಿಡಿಸಲಾರದ ಸಮಸ್ಯೆಗಳನ್ನು ಕುರಿತು. ಕನಸಿ ನಲ್ಲಿ ನಮ್ಮ ಒಳಮನಸ್ಸು ನಮ್ಮ ಸಮಸ್ಯೆಗಳಿಗೆ ಒಂದು ವಿಶಿಷ್ಟ ರೀತಿಯಲ್ಲಿ ಪರಿಹಾರ ಕಂಡುಹಿಡಿದು, ಅದನ್ನು ಸಾಂಕೇತಿಕ ಚಿತ್ರ ಗಳ ಭಾಷೆಯಲ್ಲಿ ವಿವರಿಸುತ್ತಿರುತ್ತದೆ. ಈ ದೃಷ್ಟಿಯಲ್ಲಿ ಕನಸು, ವ್ಯಕ್ತಿ ತನಗೆ ತಾನೇ ಬರೆದುಕೊಂಡ ಆತ್ಮೀಯ ಪತ್ರ. ಪ್ರತಿ ಯೊಬ್ಬರಿಗೂ ತಾವೆಂತಹವರು ಎನ್ನುವ ಆಂತರಿಕ ಭಾವನೆ ಯೊಂದು ಇದ್ದೇ ಇರುತ್ತದೆ. ಈ ಭಾವನೆ ಪ್ರಿಯವಾಗಿರ ಬಹುದು ಅಥವಾ ಅಪ್ರಿಯವಾಗಿರಬಹುದು. ಅದು ನಾವೇ ರಚಿಸಿಕೊಂಡ ನಮ್ಮ ಚಿತ್ರ.

ಕನಸುಗಳು ಆತ್ಮದರ್ಶನಕ್ಕೆ ಅನುವಾಗುವ ಹಾಗೆಯೇ ವಿಶ್ವರೂಪದರ್ಶನಕ್ಕೂ ಸಹಾಯ ಮಾಡುತ್ತವೆ. ಅವು ಬೇರೆ ಯವರನ್ನು ಕುರಿತಾದ ನಮ್ಮ ಭಾವನೆಗಳನ್ನೂ ಪ್ರತಿಬಿಂಬಿಸು ತ್ತವೆ. ಮಾನವ ಸಮಾಜಜೀವಿ. ಅವನು ಬೇರೆ ಜನರೊಡನೆ ವ್ಯವಹರಿಸಬೇಕು. ಅವನಿಗೆ ಬೇರೆಯವರನ್ನು ಕುರಿತು ತನ್ನವೇ ಆದ ಅಭಿಪ್ರಾಯಗಳಿರುತ್ತವೆ. ಇವುಗಳನ್ನು ಅವನು ಬಹಿರಂಗ ವಾಗಿ ವ್ಯಕ್ತಮಾಡಲು ಸಾಧ್ಯವಿಲ್ಲದಿರಬಹುದು. ಆಗ ಅವು ಕನಸಿನಲ್ಲಿ ವ್ಯಕ್ತವಾಗುತ್ತವೆ. ಉದಾಹರಣೆಗೆ, ತಂದೆ ತಾಯಿಯ ರನ್ನು ಕುರಿತು ನಮಗೆ ಒಳ್ಳೆಯ ಅಭಿಪ್ರಾಯವಿಲ್ಲವೆನ್ನಿ (ತಂದೆ ತಾಯಿಯರೆಲ್ಲಾ ಒಳ್ಳೆಯವರೇ ಆಗಿರಬೇಕೆಂಬುದೇನಿಲ್ಲವಲ್ಲ). ಈ ಅಭಿಪ್ರಾಯವನ್ನು ನಾವು ಬಹಿರಂಗವಾಗಿ ಹೇಳಿಕೊಳ್ಳ

ವುದು ಕಷ್ಟ. ಅಂತಹ ಸಂದರ್ಭದಲ್ಲಿ ಏನು ಕನಸು ಬೀಳಬಹುದೆಂಬುದಕ್ಕೆ ಈ ಕೆಳಗಿನ ಕನಸು ನೋಡಿ :





"ನಾನೊಬ್ಬ ಚಿಕ್ಕ ಮಗು. ನಮ್ಮ ತಂದೆಯ ಬೆನ್ನ ಮೇಲೆ ಕುಳಿತು ಕುದುರೆ ಸವಾರಿಯ ಆಟವಾಡುತ್ತಿದ್ದೇನೆ. ಕೈಯಲ್ಲಿ ಚಾಟಿಯೂ ಇದೆ. ಹೈ ಘೋಡ, ಹೈ ಘೋಡ ಎಂದು ಕೂಗುತ್ತಿದ್ದೇನೆ."

ಈ ಕನಸನ್ನು ಹೇಳಿದ ವ್ಯಕ್ತಿ. ತನ್ನ ತಂದೆಯನ್ನು ಅಷ್ಟಾಗಿ ಇಷ್ಟಪಡುತ್ತಿರಲಿಲ್ಲ. ಅವನ ಪ್ರಕಾರ ಅವನ ತಂದೆಯೊಬ್ಬ ಸರ್ವಾಧಿಕಾರಿ. ತಂದೆಯನ್ನು ಅವನು ನಿಯಂತ್ರಿಸಿದ ವಿಧಾನ ಈ ಕನಸು.

ಕನಸುಗಳು ವ್ಯಕ್ತಿಗೆ ತನ್ನ ಭೌತಿಕ ಪರಿಸರವನ್ನು ಕುರಿತು ಇರುವ ಭಾವನೆಗಳನ್ನೂ ಪ್ರತಿಬಿಂಬಿಸುತ್ತವೆ. ಇವು ಕನಸಿನ ಹಿನ್ನೆಲೆಯ ದೃಶ್ಯದ ರೂಪದಲ್ಲಿ ವ್ಯಕ್ತವಾಗುತ್ತವೆ. ಪ್ರಾಪಂಚಿಕ ಪರಿಸರ ವ್ಯಕ್ತಿಗೆ ಅನುಕೂಲವಾಗಿ ಕಾಣಬಹುದು, ಇಲ್ಲವೇ ಪ್ರತಿಕೂಲವಾಗಿ ಕಾಣಬಹುದು. ಅದು ಪ್ರತಿಕೂಲವೆಂದು ಭಾವಿಸುವ ವ್ಯಕ್ತಿಗೆ ಕನಸಿನಲ್ಲಿ ಮಳೆ, ಗುಡುಗು, ಮಿಂಚು, ಪ್ರವಾಹ, ಭೂಕಂಪ ಮೊದಲಾದವುಗಳು ಕಂಡು ಬರಬಹುದು. ಇಲ್ಲಿ ವಾಸ್ತವ ಸ್ಥಿತಿ ಹೇಗಿದೆ ಎನ್ನುವುದು ಮುಖ್ಯವಲ್ಲ; ವ್ಯಕ್ತಿ ಹೇಗೆ ಭಾವಿಸುವನೋ ಅದು ಮುಖ್ಯ. ವ್ಯಕ್ತಿಗೆ ಅವನ ಭಾವನೆಗಳೇ ಅವನ ಸತ್ಯ.

ಕನಸಿನಲ್ಲಿ ಬರುವ ಬಹು ಪ್ರಮುಖ ವಿಷಯಗಳೆಂದರೆ, ವ್ಯಕ್ತಿಯ ಅತೃಪ್ತ ಬಯಕೆಗಳು ಎಂಬುದನ್ನು ಈ ಮೊದಲೇ ಹೇಳಿದ್ದಾಗಿದೆ. ಆಂತರಿಕ ಮನಸ್ಸಿಗೆ ಒಳ್ಳೆಯದು, ಕೆಟ್ಟದ್ದು ಎನ್ನುವ ಪರಿಜ್ಞಾನವಿರುವುದಿಲ್ಲ. ಅವೆಲ್ಲಾ ಕೇವಲ ಬಯಕೆಗಳು, ಅಷ್ಟೆ. ಒಳ್ಳೆಯದು, ಕೆಟ್ಟದ್ದು ಎಂಬುದು ಸಮಾಜದ ತೀರ್ಮಾನ. ಆದುದರಿಂದ ಸಮಾಜದ ಕಟ್ಟುಪಾಡಿಗೊಳಗಾದ ಮಾನವನಿಗೆ, ತನ್ನ ಕೆಲವು ಬಯಕೆಗಳನ್ನು ತುಂಬಿಸುವುದು ಕಷ್ಟವಾಗುತ್ತದೆ. ಹೀಗೆ ಪೂರ್ತಿಗೊಳ್ಳದ ಬಯಕೆಯು ಕನಸಿನಲ್ಲಿ ಸಾಂಕೇತಿಕ ರೀತಿಯಲ್ಲಿ ಪೂರೈಸಲ್ಪಡುತ್ತದೆ.

ಕನಸುಗಳು ಅತೃಪ್ತ ಆಕಾಂಕ್ಷೆಗಳನ್ನು ತೀರಿಸಿಕೊಳ್ಳುವ ವಿಶಿಷ್ಟ ವಿಧಾನವೆಂಬುದು ಸಿಗ್ಮಂಡ್ ಫ್ರಾಯ್ಡ್‌ನ ಸ್ಪಷ್ಟ ಅಭಿಮತ. ಅವನ ಪ್ರಕಾರ ಕನಸಿಗೆ ಇವೇ ಮೂಲ ಕಾರಣಗಳು. ನಮ್ಮಲ್ಲಿರಬಹುದಾದ ನಿಷಿದ್ಧ ಬಯಕೆಗಳು—ಮುಖ್ಯವಾಗಿ ಲೈಂಗಿಕ ಬಯಕೆಗಳು ಹಾಗೂ ಇನ್ನಾರನ್ನಾದರೂ ಬಲಿ ಹಾಕ

ಬೇಕೆನ್ನುವ ಆಕ್ರಮಣಕಾರೀ ಭಾವನೆಗಳು—ಸಾಮಾನ್ಯವಾಗಿ ಅದುಮಿ ಹಿಡಿಯಲ್ಪಟ್ಟಿರುತ್ತವೆ. ಈ ಅತೃಪ್ತ ಬಯಕೆಗಳು ಸುಪ್ತ ಮನಸ್ಸಿನಲ್ಲಿ ಉಳಿದಿರುತ್ತವೆ. ವ್ಯಕ್ತಿಗೆ ಸಮಾಜದ ಪರಿವೆಯಿಲ್ಲದಿರುವಾಗ—ಅಂದರೆ ನಿದ್ರಿಸುವಾಗ—ಅವು ಹೊರ ಬರಲು ಪ್ರಯತ್ನಿಸುತ್ತವೆ. ಆದರೆ ವ್ಯಕ್ತಿ ನಿದ್ರಿಸುತ್ತಿದ್ದರೂ ಅವನ ನೈತಿಕ ಪ್ರಜ್ಞೆ ಎಚ್ಚರವಾಗಿರುತ್ತದೆ. ಇದು ವ್ಯಕ್ತಿಯ ನಿಷಿದ್ಧ ಬಯಕೆಗಳನ್ನು ಕನಸಿನಲ್ಲೂ ಪೂರೈಸಿಕೊಳ್ಳಲು ಬಿಡು ವುದಿಲ್ಲ. ಆಗ ಈ ಬಯಕೆಗಳು ನೈತಿಕ ಪ್ರಜ್ಞೆಗೆ ಮೋಸ ಮಾಡಿ, ಕಣ್ಣಿಗೆ ಮಣ್ಣೆರಚಿ, ರೂಪ ಬದಲಾಯಿಸಿ, ಮುಚ್ಚುಮರೆಯಲ್ಲಿ ಕಣ್ಣು ಮುಚ್ಚಾಲೆಯಾಟವಾಡಿ ತೃಪ್ತಿಗೊಳ್ಳುತ್ತವೆ. ಅಂದರೆ ಕನಸಿನಲ್ಲಿ ಕೂಡ ನಾವು ಕಪಟಿಗಳು.

ಕನಸುಗಳಲ್ಲಿ ಕೆಲವು ಅಹಿತವಾಗಿರುತ್ತವೆ, ಭಯಂಕರ ವಾಗಿರುತ್ತವೆ. ಈ ಕನಸುಗಳು ಬಿದ್ದಾಗ ವ್ಯಕ್ತಿಗೆ ಎಚ್ಚರವಾಗಿ ಬಿಡುತ್ತದೆ. ಉದಾಹರಣೆಗೆ, ಕನಸಿನಲ್ಲಿ ಕಾಡಾನೆಯೊಂದು ಅಟ್ಟಿಸಿಕೊಂಡು ಬರುತ್ತಿರಬಹುದು ; ನೀರಿನಲ್ಲಿ ಮುಳುಗುತ್ತಿರು ವಂತೆ ಕಾಣಬಹುದು ; ಯಾರೋ ಒಬ್ಬ ಗೂಂಡಾ ಚಾಕು ಹಿಡಿದು ಹಿಂಬಾಲಿಸಿದಂತಾಗಬಹುದು ; ಮನೆಗೆ ಬೆಂಕಿಬಿದ್ದು ಒಳಗೆ ಸಿಕ್ಕಿಹಾಕಿಕೊಂಡಂತಾಗಬಹುದು. ಇವು ದಂಡನೆಯ ರೂಪದ ಕನಸುಗಳು. ಇಂಥ ಕನಸುಗಳಿಗೆ ಕಾರಣವೇನು ? ಇಲ್ಲಿ ವ್ಯಕ್ತಿ ಮಾಡಬಾರದ್ದೇನೋ ಮಾಡಿಬಿಟ್ಟಿದ್ದಾನೆ ; ನಿಷಿದ್ಧ ಬಯಕೆಯೊಂದನ್ನು ಗುಟ್ಟಾಗಿ ತೀರಿಸಿಕೊಂಡಿದ್ದಾನೆ ; ನೈತಿಕ ಕಟ್ಟುಪಾಡನ್ನು ಮುರಿದಿದ್ದಾನೆ ; ಯಾರಿಗಾದರೂ ಇದು ತಿಳಿ ದಿದ್ದರೆ ಅವನಿಗೆ ಶಿಕ್ಷೆಯಾಗುತ್ತಿತ್ತು ; ಆದರೆ ಹಾಗೆ ಆಗಿಲ್ಲ ; ಮಾಡಿದ ತಪ್ಪು ಒಳಗೇ ಕೊರೆಯುತ್ತಿರುತ್ತದೆ ; ಅವನ ತಪ್ಪಿಗೆ

ಶಿಕ್ಷೆಯಾಗಲೇ ಬೇಕು: ಅದು ಕನಸಿನಲ್ಲಿ ನಡೆಯುತ್ತದೆ. ಅಂದರೆ, ಇಂತಹ ಕನಸುಗಳು ವ್ಯಕ್ತಿಗೆ ಅವನ ನೈತಿಕ ಪ್ರಜ್ಞೆ, ವಿಧಿಸುವ ಶಿಕ್ಷೆ. ಒಬ್ಬ ವ್ಯಕ್ತಿ ತಾನು ಏನು ತಪ್ಪು ಮಾಡಿದ್ದರೆ ಅಥವಾ ಮಾಡಿದರೆ ಏನು ಶಿಕ್ಷೆ ಅನುಭವಿಸಬೇಕಾಗುತ್ತದೆಯೆಂದು ಆಲೋಚಿಸುತ್ತಾನೋ, ಅದರ ಪ್ರತೀಕ ಇಂತಹ ಭಯಂಕರ ಕನಸುಗಳು.

## ಮಾನಸಿಕ ಗೊಂದಲಗಳು

ಕನಸುಗಳು ವ್ಯಕ್ತಿಗೆ ತನ್ನನ್ನು, ತನ್ನ ಜನರನ್ನು, ಪರಿಸರವನ್ನು ಮತ್ತು ಅಪೂರ್ಣ ಬಯಕೆಗಳನ್ನು ಕುರಿತಾದ ಆಲೋಚನೆಗಳನ್ನು ಪ್ರತಿಬಿಂಬಿಸುವ ಹಾಗೆಯೇ, ಅವನ ಕೆಲವು ಮಾನಸಿಕ ಗೊಂದಲ ಅಥವಾ ತುಮುಲಗಳನ್ನೂ ವ್ಯಕ್ತಪಡಿಸುತ್ತವೆ. ಇವುಗಳಲ್ಲಿ ಮೊದಲನೆಯದು ತಂದೆ ತಾಯಿಯನ್ನು ಕುರಿತಾದುದು. ತಂದೆ ತಾಯಿಯರ ವಿಷಯದಲ್ಲಿ ವ್ಯಕ್ತಿ ಯಾವ ಭಾವನೆಗಳನ್ನು ಹೊಂದಿರಬೇಕು ಎನ್ನುವ ಸಮಸ್ಯೆ ಅನಾದಿ ಕಾಲದ್ದು. ಅವರನ್ನು ಕುರಿತು ಭಯ, ಪ್ರೀತಿ, ದ್ವೇಷವೇ ಮುಂತಾದ ಪರಸ್ಪರ ವಿರೋಧ ಭಾವನೆಗಳು ಇರುವುದು ಸಹಜ. ತಂದೆ, ತಾಯಿ ಮತ್ತು ಮಗು (ಹೆಣ್ಣು ಅಥವಾ ಗಂಡು) ಈ ಮೂವರಿಗೆ ಸಮಸ್ಯೆ ಸಂಬಂಧಿಸಿರುವುದರಿಂದ ಇದನ್ನು 'ಮಾನವ ತ್ರಿಕೋನ' ಎಂದು ಕರೆದಿದ್ದಾರೆ. ಗಂಡುಮಗು, ತಾಯಿಯನ್ನು ಹೆಚ್ಚಿಗೆ ಪ್ರೀತಿಸುತ್ತದೆ; ತಂದೆಯೆಂದರೆ ಆಗದು. ಹೆಣ್ಣು ಮಗುವಿಗೆ, ತಂದೆಯ ಮೇಲೆ ಹೆಚ್ಚು ಪ್ರೀತಿ; ತಾಯಿಯೆಂದರೆ ಅಷ್ಟಕ್ಕಷ್ಟೆ ಎಂಬ ವ್ಯಾಖ್ಯಾನವಿದೆ.

ತುಮುಲಗಳಲ್ಲಿ ಎರಡನೆಯದು, ವ್ಯಕ್ತಿ ಸ್ವತಂತ್ರನಾಗಿರಬೇಕೋ ಪರಾಧೀನನಾಗಿರಬೇಕೋ ಎಂಬುದು. ಸ್ವತಂತ್ರ ಹಾದಿ ಜವಾಬ್ದಾರಿಯುತವಾದುದು ; ಸ್ವಾವಲಂಬಿಯಾದುದು. ಇದು ವ್ಯಕ್ತಿ ವಿಕಾಸಗೊಂಡಿರುವುದರ ಪ್ರತೀಕ. ಇಲ್ಲಿ ಸೋಲು, ಗೆಲುವಿನ ಹೊಣೆ ವ್ಯಕ್ತಿಯದು. ಆದುದರಿಂದ ವ್ಯಕ್ತಿ ಕಳವಳವನ್ನು ಅನುಭವಿಸಬೇಕಾಗುತ್ತದೆ. ಆದರೆ, ಪರಾಧೀನನಾಗಿದ್ದರೆ ಅವನಿಗೆ ಜಯಾಪಜಯಗಳ ಆತಂಕವಿಲ್ಲ. ಇದು ಸುರಕ್ಷತೆಯ ಹಾದಿ. ವಿಕಾಸದ ಹಾದಿಯಲ್ಲ. ಇಲ್ಲಿ ವ್ಯಕ್ತಿತ್ವಕ್ಕೆ ಬೆಲೆಯಿಲ್ಲ. ಸುರಕ್ಷತೆ ಮತ್ತು ಸ್ವತಂತ್ರ ಇವೆರಡೂ ಒಟ್ಟಾಗಿ ಇರುವುದು ಸಾಧ್ಯವಿಲ್ಲ. ಆದುದರಿಂದ ಯಾವುದನ್ನು ಆರಿಸಿಕೊಳ್ಳುವುದು, ಎನ್ನುವ ಸಮಸ್ಯೆ ಎಲ್ಲರಿಗೂ ಇರುತ್ತದೆ. ಎಷ್ಟೋ ವೇಳೆ ಈ ಸಮಸ್ಯೆಗಳಿಗೆ ಪರಿಹಾರ ದೊರಕದೆ ಅವು ಕನಸಿನಲ್ಲಿ ಪ್ರಕಟವಾಗುತ್ತವೆ. ಉದಾಹರಣೆಗೆ ಈ ಕನಸು ನೋಡಿ : "ಬಸ್‌ಗಾಗಿ ಕಾದು ನಿಂತಿದ್ದೇನೆ. ನನ್ನ ತಂದೆತಾಯಿಯರು ಬೀಳ್ಕೊಡಲು ಬಂದಿದ್ದಾರೆ. ಬಹಳ ಹೊತ್ತು ಕಾದರೂ ಬಸ್ ಬರುವುದಿಲ್ಲ. ಕೊನೆಗೆ ಬರುತ್ತದೆ. ಕಂಡಕ್ಟರ್ ಸೀಟಿಲ್ಲವೆಂದು ಹೇಳಿ ನಿಲ್ಲಿಸದೇ ಹೋಗಿಬಿಡುತ್ತಾನೆ. ನಾನು ಹಿಂದುಳಿಯುತ್ತೇನೆ." ಇದು ತಂದೆತಾಯಿಯರ ಜತೆಯ ಸುರಕ್ಷಿತ ಜೀವನವನ್ನು ಬಿಟ್ಟು ಸ್ವತಂತ್ರವಾಗಿ ಬಾಳಲು ಹೆದರುತ್ತಿರುವ ಮಗನ ಕನಸು.

ಕನಸಿಗೆ ಕಾರಣವಾಗುವ ಮೂರನೇ ಬಗೆಯ ತುಮುಲವು ನಮ್ಮ ಲೈಂಗಿಕ ಮನೋವೃತ್ತಿಗೆ ಸಂಬಂಧಿಸಿದುದು. ಈ ತುಮುಲದ ಬೇರು ಬಹಳ ಆಳವಾದದ್ದು. ಮನುಷ್ಯರನ್ನೆಲ್ಲಾ ಗಂಡಸರು, ಹೆಂಗಸರೆಂದು ವಿಭಜಿಸಬಹುದಾದರೂ ಗಂಡಸರೆಲ್ಲಾ ಪೂರ್ಣವಾಗಿ ಗಂಡಸರಲ್ಲ, ಹೆಂಗಸರೆಲ್ಲಾ ಸಂಪೂರ್ಣವಾಗಿ

ಹೆಂಗಸರಲ್ಲ, ಎಂಬುದು ಒಂದು ವೈಜ್ಞಾನಿಕ ಸತ್ಯ. ಶಾರೀರಿಕ ವಾಗಿ ಮತ್ತು ಮಾನಸಿಕವಾಗಿ ಪುರುಷರಲ್ಲಿ ಸ್ತ್ರೀ ಗುಣಗಳೂ, ಸ್ತ್ರೀಯರಲ್ಲಿ ಪುರುಷ ಲಕ್ಷಣಗಳೂ ಇರುತ್ತವೆ ಮತ್ತು ಈ ಗುಣಗಳು ಪ್ರತಿಯೊಬ್ಬರಲ್ಲೂ ಹೊರಬರಲು ಯತ್ನಿಸುತ್ತವೆ. ಸಮಾಜ ಇದಕ್ಕೆ ಅವಕಾಶಕೊಡುವುದಿಲ್ಲ. ಸಮಾಜದಲ್ಲಿ ಗಂಡಿಗೂ ಹೆಣ್ಣಿಗೂ ನಿರ್ದಿಷ್ಟವಾದ ಪಾತ್ರವನ್ನು ವಹಿಸಿ ಕೊಟ್ಟಿದ್ದು, ಅವರು ತಮ್ಮ ಲೈಂಗಿಕ ಪಾತ್ರಗಳನ್ನು ಸರಿಯಾಗಿ ವಹಿಸದೇ ಹೋದರೆ ನಗೆಗೀಡಾಗಬೇಕಾಗುತ್ತದೆ. ಸ್ತ್ರೀ ಗುಣ ಗಳನ್ನು ಪ್ರದರ್ಶಿಸುವ ಪುರುಷನನ್ನು 'ಹೆಣ್ಣಿಗ'ನೆಂದೂ ಪುರುಷ ಲಕ್ಷಣಗಳನ್ನು ತೋರುವ ಹೆಣ್ಣನ್ನು 'ಗಂಡುಬೀರಿ'ಯೆಂದೂ ಕರೆದು ಅವಹೇಳನ ಮಾಡುತ್ತಾರೆ. ಆದುದರಿಂದ ಸ್ತ್ರೀ, ಪುರುಷರು ಸ್ತ್ರೀ, ಪುರುಷರಂತೆ ವರ್ತಿಸಲು ಕಾತುರರಾಗಿರುತ್ತಾರೆ. ಆದರೆ ಅವರಲ್ಲಿರುವ ಪರಲಿಂಗೀ ಲಕ್ಷಣಗಳೇನಾಗಬೇಕು ? ಅವು ಅವ್ಯಕ್ತ ವಾಗಿ ಸುಪ್ತ ಮನಸ್ಸಿನಲ್ಲಿದ್ದು, ಅವಕಾಶ ಸಿಕ್ಕಿದಾಗ ಕನಸಿನಲ್ಲಿ ಸಾಂಕೇತಿಕವಾಗಿ ಹೊರಬರುತ್ತವೆ. ಈ ಕೆಳಗಿನ ಕನಸು ಲೈಂಗಿಕ ತುಮುಲದ ಪ್ರತಿಧ್ವನಿ : "ನಮ್ಮ ಸ್ಕೂಲಿನ ಮಕ್ಕಳೆಲ್ಲಾ ಸೇರಿ ಒಂದು ಪಿಕ್‌ನಿಕ್‌ಗೆ ಹೋಗಿದ್ದೇವೆ. ಆಶ್ಚರ್ಯದ ಸಂಗತಿ ಯೆಂದರೆ, ಹುಡುಗರೆಲ್ಲಾ ಲಂಗ, ಜಾಕೆಟ್ ತೊಟ್ಟಿದ್ದಾರೆ. ಹುಡುಗಿಯರೆಲ್ಲಾ ಶರ್ಟ್, ನಿಕ್ಕರ್ ಹಾಕಿಕೊಂಡಿದ್ದಾರೆ." ಈ ಕನಸು ಪರಲಿಂಗ ಬಯಕೆಗಳ ಪ್ರತಿಬಿಂಬ.

ಕನಸನ್ನು ಪ್ರೇರೇಪಿಸುವ ನಾಲ್ಕನೇ ಬಗೆಯ ತುಮುಲಗಳು ನೈತಿಕ ಮೂಲದವು. ನಮ್ಮೆಲ್ಲರಿಗೂ ಸರಿ-ತಪ್ಪು, ಒಳ್ಳೆಯದು ಕೆಟ್ಟದ್ದು, ಎನ್ನುವ ಭಾವನೆಗಳಿರುತ್ತವೆ. ಈ ಭಾವನೆಗಳನ್ನು ಸಮಾಜ ನಿರ್ಮಿಸಿ ನಮ್ಮಲ್ಲಿ ತುಂಬಿರುತ್ತದೆ. ಆದರೆ ಎಷ್ಟೋ

ವೇಳೆ ಸಮಾಜ ಸರಿಯೆಂದದ್ದು ತಪ್ಪಾಗಿಯೂ, ತಪ್ಪೆಂದದ್ದು ಸರಿಯಾಗಿಯೂ ನಮಗೆ ಕಂಡುಬರುತ್ತದೆ. ಮನುಷ್ಯನಿಗೆ ತೀವ್ರತರವಾದ ಹಲವು ಬಯಕೆಗಳಿದ್ದು, ಅವನ ಸಾಮಾಜಿಕ ಹಾಗೂ ನೈತಿಕ ಪ್ರಜ್ಞೆ, ಅವುಗಳನ್ನು ಪೂರೈಸಿಕೊಳ್ಳಲು ಬಿಡುವುದಿಲ್ಲ. ಶಕ್ತಿಯುತವಾದ ಈ ಬಯಕೆಗಳು ಕನಸಿನಲ್ಲಿ ಕಂಡು ಬರುತ್ತವೆ. ಇಂತಹ ಒಂದು ಕನಸು ಈ ಕೆಳಗಿನದು : "ಬೀದಿಯಲ್ಲಿ ನಾನೊಬ್ಬನೇ ಹೋಗುತ್ತಿದ್ದೇನೆ. ಅಲ್ಲೊಂದು ಮನೆ. ಸುತ್ತಲೂ ಕಾಂಪೌಂಡಿದೆ. ಮನೆಯೊಳಗೆ ಒಂದು ಸೀಬೆ ಮರವಿದೆ. ಹಣ್ಣುಗಳಿಂದ ತುಂಬಿದೆ. ಹಣ್ಣು ಕೀಳುವ ಆಸೆಯಾಗುತ್ತದೆ. ಗೇಟು ತೆರೆದು ಒಳಗೆ ಹೋಗುತ್ತೇನೆ. ಅಷ್ಟರಲ್ಲೆ ನಾಯಿಯೊಂದು ಬೊಗಳಿಕೊಂಡು ನನ್ನೆಡೆಗೆ ಬರುತ್ತದೆ. ಭಯವಾಗಿ ಎಚ್ಚರವಾಗುತ್ತದೆ." ಇಲ್ಲಿ ಹಣ್ಣು ತಿನ್ನಬೇಕೆನ್ನುವುದು ಸಹಜ ಪ್ರವೃತ್ತಿ. ನಾಯಿ ನೈತಿಕ ಪ್ರಜ್ಞೆಯ ಸಂಕೇತ. ಕನಸು ಮಾನಸಿಕ ತುಮುಲದ ಪ್ರತಿರೂಪ.

ಕನಸಿನಲ್ಲಿ ಪ್ರಕಟವಾಗುವ ಐದನೆಯ ತುಮುಲ, ಹುಟ್ಟು ಸಾವುಗಳಿಗೆ ಸಂಬಂಧಿಸಿದ್ದು. ನಾವೆಲ್ಲಾ ಹುಟ್ಟಿದ್ದೇವೆ ; ಒಂದು ದಿನ ಸಾಯುತ್ತೇವೆ ; ಹುಟ್ಟಬೇಕೆಂದೇನೂ ಬಯಸಿರಲಿಲ್ಲ. ಹುಟ್ಟಿದ ಮೇಲೆ ಜೀವಿಸಿರಬೇಕೆನ್ನಿಸುತ್ತದೆ. ಆದರೆ ಸಾವು ತಪ್ಪಿದ್ದಲ್ಲ; ಹೀಗೆ ಜೀವನ ಹುಟ್ಟು ಸಾವುಗಳ ನಡುವಿನ ಒಂದು ಸಮರಭೂಮಿ. ಈ ಹುಟ್ಟು ಸಾವುಗಳನ್ನು ಕುರಿತು ಎಚ್ಚರವಿರುವಾಗ ನಾವು ಅಷ್ಟಾಗಿ ಆಲೋಚಿಸುವುದಿಲ್ಲ. ಆ ಕೆಲಸವನ್ನು ನಮ್ಮ ಸುಪ್ತಮನಸ್ಸು ನಾವು ನಿದ್ರಿಸುವಾಗ ಮಾಡುತ್ತದೆ. ಹೀಗೆ ಜೀವನ್ಮರಣ ಸಮಸ್ಯೆ ಕನಸಿಗೆ ಕಾರಣವಾಗುತ್ತದೆ.

ಸಾಮಾನ್ಯವಾಗಿ ಈ ಕನಸುಗಳು ೫೦ ವರ್ಷಕ್ಕಿಂತ ಹೆಚ್ಚು ವಯಸ್ಸಿನವರಲ್ಲಿ ಜಾಸ್ತಿ. ಇದಕ್ಕೆ ಕಾರಣ ಸ್ಪಷ್ಟವಾಗಿದೆ.

ಕನಸಿನಲ್ಲಿ ಏನೇ ಕಾಣಲಿ, ಅವುಗಳಿಗೆ ಪ್ರೇರಣೆಗಳೇನೇ ಇರಲಿ, ಒಟ್ಟಾರೆ ದೃಷ್ಟಿಯಲ್ಲಿ ಕನಸುಗಳು ಸುಖಪ್ರದವಾಗಿರುವುದಿಲ್ಲ ; ಸಂತೋಷದಾಯಕವಾಗಿರುವುದಿಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. ಸಾಮಾನ್ಯವಾಗಿ ಸಂತೋಷದಾಯಕ ವಿಚಾರಗಳು, ಸಿದ್ಧಿ ಸಾಧನೆಗಳು ನಿಮ್ಮನ್ನು ಹರ್ಷಗೊಳಿಸುತ್ತವೆ. ನಿಮ್ಮ ಮನಸ್ಸನ್ನು ಸಡಿಲಗೊಳಿಸುತ್ತವೆ. ಇದರ ಮೇಲೆ, ಸಂಪೂರ್ಣವಾಗಿ ನೆರವೇರಿದ ಸುಖ ಸಂತೋಷಗಳನ್ನು ಕುರಿತು ಆಲೋಚಿಸಬೇಕಾದ್ದೇನಿದೆ ? ಹೀಗೆ, ನೀವು ಹಗಲಲ್ಲೇ ಯೋಚಿಸದ ವಿಷಯಗಳು, ರಾತ್ರಿಯ ಕನಸಿಗೆ ತಾನೆ ಹೇಗೆ ವಸ್ತುಗಳಾದಾವು? ಆದುದರಿಂದ ಉಲ್ಲಾಸಕರವಾದ ಕನಸುಗಳು ಬೀಳುವುದು ಬಹಳ ಅಪರೂಪ. ಮುಕ್ಕಾಲು ಪಾಲು ಕನಸುಗಳೆಲ್ಲಾ ನಿರಾಶಾದಾಯಕವಾಗಿರುತ್ತವೆ. ಹಾಗೆ ನೋಡಿದರೆ, ಕನಸಿನಲ್ಲೂ ಸುಖ ಸಂತೋಷವನ್ನೇ ಕಾಣುವ ವ್ಯಕ್ತಿ, ನಿಜವಾಗಿಯೂ ತನ್ನ ಸಮಸ್ಯೆಗಳನ್ನು ಎದುರಿಸುತ್ತಿಲ್ಲ, ಜಾರಿಕೊಳ್ಳುತ್ತಿದ್ದಾನೆ ಎನ್ನಬಹುದು. ಎಚ್ಚರವಿರುವಾಗ ಸಮಸ್ಯೆಗಳು ಅತಿಯಾದಾಗ, ಕೆಲವರು ಹಗಲುಗನಸು ಕಾಣುವರಲ್ಲವೇ, ಹಾಗೆಯೇ ಈ ಸುಖಕರ ಕನಸುಗಳು ಕೂಡ. ಅವು ತಿರುಕನ ಕನಸುಗಳು. ಗಾಳಿ ಗೋಪುರಗಳು.

## ಕನಸಿನ ಉಪಯೋಗಗಳು

ಕನಸಿನಿಂದ ಏನಾದರೂ ಪ್ರಯೋಜನವಿದೆಯೇ ? ಎಂದು ಕೇಳಬಹುದು. ಇದಕ್ಕೆ ಉತ್ತರ "ಇದೆ" ಎಂದು. ಸಿಗ್ಮಂಡ್ ಫ್ರಾಯ್ಡನ ಪ್ರಕಾರ ಅವು ನಿಮ್ಮ ನಿದ್ದೆಯ ಕಾವಲುಗಾರರು.

ಕನಸು ಬೀಳುವುದರಿಂದ ನಿಮ್ಮ ನಿದ್ದೆ ಅಡಚಣೆ ಇಲ್ಲದೆ ನಡೆದು, ನಿಮ್ಮ ಶರೀರಕ್ಕೂ ಮನಸ್ಸಿಗೂ ವಿಶ್ರಾಂತಿ ದೊರಕುತ್ತದೆ ಎಂಬುದು ಫ್ರಾಯ್ಡನ ಅಭಿಪ್ರಾಯ. ಅಂದರೆ ನೀವು ನಿದ್ರಿಸ ಲೋಸುಗ ಕನಸು ಕಾಣುತ್ತೀರಿ ಎಂದರ್ಥ. ಆದರೆ ಕೆಲವರು ನೀವು ಕನಸು ಕಾಣುವುದಕ್ಕೋಸ್ಕರವೇ ನಿದ್ರಿಸುತ್ತೀರಿ ಎಂದು ಹೇಳುತ್ತಾರೆ. ಇವರ ಪ್ರಕಾರ ಮನುಷ್ಯನಿಗೆ ಕನಸು ಕಾಣುವ ಆವಶ್ಯಕತೆ ಇರುತ್ತದೆ. ಈ ವಾದಕ್ಕೆ ಪುಷ್ಟಿಯಾಗಿ ಕೆಲವು ಪ್ರಯೋಗಗಳೂ ನಡೆದಿವೆ. ಉದಾಹರಣೆಗೆ, ಒಂದು ಪ್ರಯೋಗ ದಲ್ಲಿ ಕೆಲವು ವ್ಯಕ್ತಿಗಳನ್ನು ಕನಸು ಕಣ್ಣಿಗೆ ಕಾಣದಂತೆ ನೋಡಿ ಕೊಳ್ಳಲಾಯಿತು. ಅಂದರೆ ಅವರಲ್ಲಿ ಕನಸನ್ನು ಸೂಚಿಸುವ ಕಣ್ಣಿನ ಶೀಘ್ರ ಚಲನೆಗಳು ಮತ್ತು ಮಿದುಳಿನ ವಿದ್ಯುದಲೆ ಕಂಡು ಬಂದಾಗ ಅವರನ್ನು ಎಚ್ಚರಿಸಲಾಯಿತು. ಹೀಗೆ ಮಾಡಿದ ವ್ಯಕ್ತಿಗಳಲ್ಲಿ, ಅವರು ಮತ್ತೆ ನಿದ್ರಿಸಿದಾಗ ಕನಸು ಕಾಣುವ ಪರಿ ಪಾಠ ಇಮ್ಮಡಿಯಾದುದು ಕಂಡುಬಂತು. ಹಲವಾರು ದಿನ ಗಳಲ್ಲಿ ಅವರನ್ನು ಕನಸು ಕಾಣದಂತೆ ನೋಡಿಕೊಂಡಾಗ ಅವರಲ್ಲಿ ಕೆಲವು ಅಹಿತವಾದ ಮಾನಸಿಕ ಪರಿವರ್ತನೆಗಳೂ ಕಂಡು ಬಂದವು. ಅಂದರೆ ನಾವು ಬೇರೆಲ್ಲಾ ಕಾರ್ಯಗಳನ್ನು ಮಾಡು ವಷ್ಟೇ ಸ್ವಾಭಾವಿಕವಾಗಿ ಕನಸನ್ನೂ ಕೂಡ ಕಾಣುತ್ತೇವೆ ಎಂದಾಯ್ತು. ಇದರಲ್ಲಿ ಆಶ್ಚರ್ಯವೇನೂ ಇಲ್ಲ.

ಈಗ ನಿಮಗೆ ಕನಸನ್ನು ಕುರಿತಾದ ಒಂದು ಸ್ಥೂಲ ಚಿತ್ರ ದೊರಕಿರಬಹುದು. ಕನಸಿನ ವಿಚಾರವಾಗಿ ನಿಮಗೆ ಭಯ ಭೀತಿ ಅನವಶ್ಯಕ. ಅವು ಸಹಜವಾದ ಮಾನಸಿಕ ಕ್ರಿಯೆಗಳು. ನೀವು ಹಗಲು ಆಲೋಚಿಸುವಂತೆ, ನಿದ್ರೆ ಮಾಡುವಾಗ ನಿಮ್ಮ ಮನಸ್ಸು ಮಾಡುವ ಆಲೋಚನೆಗಳ ಒಂದು ವಿಶಿಷ್ಟ ರೂಪವೇ

ಕನಸು. ನಿದ್ದೆ ಮಾಡುವಾಗ ನಿಮ್ಮ ಮನಸ್ಸು ಅಂತರ್ಮುಖಿಯಾಗುತ್ತದೆ. ತನ್ನ ಒಳ ಕೊಠಡಿಯ ಬಾಗಿಲು ತೆರೆಯುತ್ತದೆ. ಅಲ್ಲಿನ ಸಮಸ್ಯೆಗಳನ್ನು ಕುರಿತು ಆಲೋಚಿಸುತ್ತದೆ. ಅವುಗಳಿಗೆ ತನ್ನದೇ ಆದ ರೀತಿಯಲ್ಲಿ ಪರಿಹಾರಗಳನ್ನು ಕಂಡುಹಿಡಿಯುತ್ತದೆ. ಅವುಗಳನ್ನು ಸಚಿತ್ರವಾಗಿ ವಿವರಿಸುತ್ತದೆ. ಅದೇ ಕನಸು.

ಆದುದರಿಂದ ಕನಸುಗಳಿಗೆ ಅರ್ಥವಿದೆ, ಕಾರಣವಿದೆ ಮತ್ತು ಉದ್ದೇಶವೂ ಇದೆ ಎಂಬುದನ್ನು ನೀವು ಅರಿಯಬೇಕು. ನಿಮ್ಮ ಕನಸುಗಳನ್ನು ಅರಿಯುವುದರ ಮೂಲಕ, ನೀವು ನಿಮ್ಮ ಅಂತರಂಗವನ್ನು ಅರಿಯಬಹುದು. ಕನಸುಗಳು ನಿಮ್ಮ ನಿಜವಾದ ರೂಪವೇನೆಂಬುದನ್ನು ನಿಮಗೆ ತೋರಿಸುವ ಬಹು ಮುಖ್ಯ ಸಾಧನಗಳು. ಅಂದಮೇಲೆ ಕನಸಿನಂತಹ ಮನಸ್ಸಿನ ಅಪೂರ್ವ ಸೃಷ್ಟಿಯೆಡೆಗೆ ನಮ್ಮೆಲ್ಲರ ಗಮನ ತೀವ್ರವಾಗಿ ಹರಿಯಬೇಕಾದ್ದು ಬಹಳ ಅವಶ್ಯಕ.



# ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ ಪರಿಷತ್ತು ಪ್ರಕಟಿಸಿದ ೧೦೧ ಮಕ್ಕಳ ಪುಸ್ತಕಗಳು

ಪ್ರಾರ್ಥನಾ ಶ್ಲೋಕಗಳು
ಗಾಳಿ
ಭೂಮಿ
ಅರಣ್ಯ
ನದಿಗಳು
ಕುಂಕುಮ ಕೇಸರಿ
ವನರಾಜ ಹುಲಿ
ನಾಯಿ
ಕ್ಯಾಮೆರಾ
ದುರ್ಬೀನು
ಗಡಿಯಾರ
ದೂರವಾಣಿ
ಮನೆಯಲ್ಲೊಂದು ಹವಾವೀಕ್ಷಣಾಲಯ
ನಮ್ಮ ಶರೀರ
ಕಾಯಿಲೆಗಳು
ವೀಣೆ
ಗಾಳಿ ವಾದ್ಯಗಳು
ಪುಸ್ತಕೋದ್ಯಮ
ಆಟಗಳು
ಆಟಿಕೆಗಳು
ಸರ್ವಧರ್ಮ ಸಮಭಾವ
ಸುಂದರ ಕರ್ನಾಟಕ
ಕನ್ನಡದ ಕತೆ
ನಗು
ಗೆಳೆತನ
ಕುಟುಂಬ
ಸಂತೆ
ಜಾತ್ರೆಗಳು
ಹಬ್ಬಗಳು
ನಾಣ್ಯದ ಕತೆ
ಬಾವುಟ
ನಾನಾ ಫಡ್ನವೀಸ್
ಕವಿ ರವೀಂದ್ರ
ಗಾಂಧಿ

ಅರವಿಂದರು
ಸರ್ ಎಂ. ವಿಶ್ವೇಶ್ವರಯ್ಯ
ಎನ್. ಎಸ್. ಹರ್ಡೀಕರ್
ರಜತಗಿರಿಯ ರಾಜ
ಷೇಕ್ಸ್‌ಪಿಯರ್
ಗ್ಯಾರಿಬಾಲ್ಡಿ
ಒಡಪುಗಳು
ಪುಟ್ಟನ ಪ್ರಶ್ನೆ-ಅಮ್ಮನ ಉತ್ತರ
ಮಹಿಮೆಯ ಉಂಗುರ
ಬಲಿಗುಹೆ
ಹಳ್ಳಿಗೆ ಬಂದ ಎಳೆಯರು
ಭೂತಯ್ಯನ ಗುಡಿ
ನಾಗ-ಸಾಕಿ
ರಶ್ಮಿ ಸರ್ಕಸ್ ಕಂಪನಿ
ಹಿಮಾನಿ ಮತ್ತು ಏಳು ಜನ ಕುಳ್ಳರು
ಜಾಣ ಮೊಲ
ವಿದ್ಯುತ್ತು
ಗುಡುಗು-ಮಿಂಚು
ಅಂಕಿಗಳು
ಮೀನುಗಳು
ಆನೆ
ಹೆಲಿಕಾಪ್ಟರ್
ಕಣ್ಣು
ಮಿದುಳು
ಹಿಮಾಲಯ
ಚಿನ್ನ
ಗಾಜು
ಅಂಚೆ
ಕ್ರಿಕೆಟ್
ಟೆನ್ನಿಸ್
ಮಣ್ಣು
ಬೆಳೆಗಳು
ಹತ್ತಿ

ಸಕ್ಕರೆ
ಕಾಫಿ
ಭಾಷೆ
ಕಲ್ಯಾಣದ ಚಾಲುಕ್ಯರು
ಕಾಮನಬಿಲ್ಲು
ಹೂಗೊಂಚಲು
ಕಣ್ಣು ತೆರೆದಾಗ
ಕಿಟ್ಟನ ಕಥೆ
ಸಾಕು ಪ್ರಾಣಿಗಳು
ಐನ್‌ಸ್ಟೈನ್
ಉಳಿತಾಯ
ಕಾರಾಗೃಹಗಳು
ಹೂಬಿಡದ ಸಸ್ಯಗಳು
ಜರೀ ಗಿಡಗಳು
ಕೀಟಾಹಾರಿ ಸಸ್ಯಗಳು
ವನಸಂಪತ್ತು
ಹಕ್ಕಿಗಳ ವಲಸೆ
ಬೆಂಕಿಕಡ್ಡಿ
ಐಸಾಕ್ ನ್ಯೂಟನ್
ಸೌರವ್ಯೂಹ
ಸರೀಸೃಪಗಳು
ಕೋತಿ
ಕೋಳಿಗಳು
ಮನುಷ್ಯನ ವಂಶಾವಳಿ
ಸಸ್ತನಿಗಳು
ಜಾನುವಾರು
ಜೀವ ವಿಕಾಸ
ಅನುವಂಶೀಯತೆ
ಹೂಗಿಡಗಳು
ಮರುಭೂಮಿ
ಬೇಸಾಯ
ಫುಟ್ಬಾಲ್
ಬಂದರುಗಳು
ದೇಹರಕ್ಷಣೆ




## ಈ ಮಾಲೆಯ ಪುಸ್ತಕ ಕುರಿತು

ಕನ್ನಡ ನಾಡಿನ ಮಕ್ಕಳು ಶಾಲೆಯ ಕಲಿಕೆ ಜೊತೆಗೆ ನಿತ್ಯದ ಬದುಕಿನಿಂದಲೂ ಪ್ರಚಲಿತ ವಿದ್ಯಮಾನಗಳಿಂದಲೂ ಜ್ಞಾನ ಸಂಪಾದಿಸುವಂತಾಗಬೇಕೆಂಬುದು ನಮ್ಮ ಇಚ್ಛೆ. ಇದರಿಂದ ಅವರ ಬದುಕು ಸಂಪನ್ನವಾಗುವುದು; ಅವರ ಪ್ರತಿಭೆ ಅರಳುವುದು.

ಮಕ್ಕಳ ಅಂತರರಾಷ್ಟ್ರೀಯ ವರ್ಷವಾದ ೧೯೭೯ರಲ್ಲಿ ಈ ಉದ್ದೇಶದಿಂದ ಪರಿಷತ್ತು ೧೧೧ ಪುಸ್ತಕಗಳನ್ನು ಪ್ರಕಟಿಸಿತು. ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ, ಕೃಷಿ ಮುಂತಾದ ಹಲವು ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳ ಬಗೆಗೆ, ಶಿಶುಸಾಹಿತ್ಯದ ಬಗೆಗೆ ಒಲವು, ಕಳಕಳಿ ಇರುವ ಬರಹಗಾರರು ನಮಗಾಗಿ ಇವನ್ನು ಬರೆದು ಕೊಟ್ಟರು.

ಅಗ್ಗದ ಬೆಲೆಯಲ್ಲಿ ನಿಲುಕುವಂತೆ ಇವನ್ನು ಅಚ್ಚುಮಾಡಿ ಹರಿಯಬಿಟ್ಟಾಗ ಇವು ಬಹಳ ಜನಪ್ರಿಯವಾದುವು; ಮಕ್ಕಳ ಪಾಲಿಗೆ ಉಪಯುಕ್ತವಾಗಿ ಪರಿಣಮಿಸಿದುವು.

ಇದರಿಂದ ಉತ್ತೇಜಿತರಾದ ನಾವು ಮಕ್ಕಳಿಗಿಂತ ಸ್ವಲ್ಪ ಹೆಚ್ಚು ತಿಳಿವಳಿಕೆ ಪಡೆದಿರುವ ಕಿರಿಯರಿಗಾಗಿ ಒಂದು ಮಾಲೆ ಆರಂಭಿಸಿದ್ದೇವೆ. ಈ ಮಾಲೆಯ ಪುಸ್ತಕಗಳು ಸಹಾ ಹಿಂದಿನ ಮಕ್ಕಳ ಪುಸ್ತಕಗಳಂತೆಯೇ ಯಶಸ್ಸು ಗಳಿಸುವುವೆಂಬ ನಂಬಿಕೆ ನಮ್ಮದು.

ಈ ಮಾಲೆಯ ಪುಸ್ತಕಗಳು ನಾಡಿನ ಮೂಲೆ ಮೂಲೆಯ ಮಕ್ಕಳ ಕೈ ಸೇರಿ ಅವರ ಮನೋವಿಕಾಸಕ್ಕೆ ನೆರವಾಗುವುವೆಂಬ ಖಚಿತ ಭರವಸೆ ನಮಗಿದೆ.

ಹಂಪ. ನಾಗರಾಜಯ್ಯ